ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 16ನೇ ಮಾರ್ಚ್, 2020

ಗ್ರಂಥಪಾಲಕರ ಕನಿಷ್ಠ ವೇತನ ಕುರಿತು

ಶ್ರೀ ಪ್ರಾಣೇಶ್ ಎಂ.ಕೆ. (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

147 (1029) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಮತ್ತು ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಸಾರ್ವಜನಿಕ ಗ್ರಂಥಾಲಯ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಗ್ರಾಮೀಣ ಗ್ರಂಥಾಲಯಗಳಲ್ಲಿ ಗ್ರಂಥಪಾಲಕರಾಗಿ ಸೇವೆ ಸಲ್ಲಿಸುತ್ತಿರುವ ನೌಕರರುಗಳಿಗೆ ಕನಿಷ್ಟ ವೇತನ ಜಾರಿಯಾಗದಿರುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಈ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು ; ಸಂಪೂರ್ಣ ಮಾಹಿತಿ ನೀಡುವುದು ;

(ಇ) ಗ್ರಂಥಾಲಯ ಇಲಾಖೆ ಮೇಲ್ವಿಚಾರಕರ ಕೆಲಸದ ಅವಧಿಯನ್ನು 4 ಗಂಟೆಗಳ ಅವಧಿಯಿಂದ 8 ಗಂಟೆಗಳ ಅವಧಿಗೆ ಬದಲಾಯಿಸುವ ವಿಚಾರ ಸರ್ಕಾರದ ಮುಂದೆ ಇದೆಯೇ ; ಹಾಗಿದ್ದಲ್ಲಿ, ಈ ಕುರಿತು ಯಾವ ಕಾಲಮಿತಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ;

(ಈ) ಸದರಿ ನೌಕರರನ್ನು ಕನಿಷ್ಟ ವೇತನದ ವ್ಯಾಪ್ತಿಗೆ ಒಳಪಡಿಸುವ ವಿಚಾರವಾಗಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯಲ್ಲಿನ ಕಡತ ಸಂಖ್ಯೆ: 220/ಇಡಿ/ ಎಲ್.ಐ.ವಿ./2016ರಲ್ಲಿ ಯಾವುದೇ ಪ್ರಗತಿ ಕಾಣದೆ ಹಾಗೆ ಬಾಕಿ ಉಳಿದುಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ,ಈ ಕುರಿತು ಕೈಗೊಂಡ ಕ್ರಮಗಳೇನು ; ಯಾವ ಕಾಲಮಿತಿಯಲ್ಲಿ ಈ ಕಡತಕ್ಕೆ ಅನುಮೋದನೆ ನೀಡಲಾಗುವುದು ? (ಸಂಪೂರ್ಣ ಮಾಹಿತಿ ನೀಡುವುದು)